# ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 555
ಸದಸ್ಯರ ಹೆಸರು : ಶ್ರೀ.ಮೋಹನ್ ಕುಮಾರ್ ಕೊಂಡಜ್ಜಿ (ನಾಮನಿರ್ದೇಶನ ಹೋಂದಿದವರು)
ಉತ್ತರಿಸುವ ದಿನಾಂಕ : 24-09-2020
ಉತ್ತರಿಸುವ ಸಚಿವರು : ಮಾನ್ಯ ಜಲಸಂಪನ್ಮೂಲ ಸಚಿವರು

| ಕ್ರ. ಸಂ. | ಪ್ರಶ್ನೆಗಳು | ಉತ್ತರ |
|---|---|---|
| ಅ) | ವಾರಾಹಿ ಎಡದಂಡೆ ಯೋಜನೆಗೆ ತಗಲುವ ಯೋಜಿತ ಅಂದಾಜು ಮೊತ್ತವೆಷ್ಟು; ಈವರೆಗೂ ಬಿಡುಗಡೆಯಾದ ಅನುದಾನವೆಷ್ಟು; ವೆಚ್ಚ ಮಾಡಲಾದ ಮೊತ್ತವೆಷ್ಟು; ಬಿಡುಗಡೆಗೆ ಬಾಕಿಯಿರುವ ಅನುದಾನವೆಷ್ಟು; | ವಾರಾಹಿ ನೀರಾವರಿ ಯೋಜನೆಯ ಪರಿಷ್ಕೃತ ಅಂದಾಜು ಮೊತ್ತವು ರೂ.1789.50ಕೋಟಿಗಳಿಗೆ ಅಂದಾಜಿಸಲಾಗಿರುತ್ತದೆ. ಇದರಡಿ ಬರುವ ವಾರಾಹಿ ಎಡದಂಡೆ ಕಾಲುವೆ ಜಾಲದ ನಿರ್ಮಾಣ ಕಾಮಗಾರಿಗಳಿಗೆ ,ಭೂ-ಸ್ವಾಧೀನ ಹಾಗೂ ಇತರೆ ಕೆಲಸಗಳಿಗೆ ರೂ.690.57 ಕೊಟಿಗಳೆಂದು ಅಂದಾಜಿಸಲಾಗಿದೆ. ಸದರಿ ನಾಲೆಯ ಜಾಲಗಳನ್ನು ಕೈಗೊಳ್ಳಲು ಆಗಸ್ಟ್ 2020ರ ವರೆಗೆ ಬಿಡುಗಡೆಯಾದ ಅನುದಾನ/ ವೆಚ್ಚ ಮಾಡಲಾದ ಮೊತ್ತವು ರೂ.321.82 ಕೋಟಿಗಳಾಗಿರುತ್ತದೆ ಹಾಗೂ ಇನ್ನುಳಿದ ಕಾಮಗಾರಿಗಳಿಗೆ ರೂ.368.75 ಕೋಟಿ ಬಾಕಿ ಇರುತ್ತದೆ. |
| ಆ) | ಈ ಯೋಜನೆಯು ಹಾದು ಹೋಗುವ ಗ್ರಾಮಗಳು ಯಾವುವು: ಈ ಯೋಜನೆಯು ಹೊಂದಿರುವ ಅಚ್ಚುಕಟ್ಟು ಪ್ರದೇಶದ ವಿಸ್ತೀರ್ಣವೆಷ್ಟು; ಪೂರ್ಣಗೊಂಡ ಅಚ್ಚುಕಟ್ಟು ಪ್ರದೇಶದ ವಿಸ್ತೀರ್ಣವೆಷ್ಟು; ಬಾಕಿಯಿರುವ ಅಚ್ಚುಕಟ್ಟು ಪ್ರದೇಶದ ವಿಸ್ತೀರ್ಣವೆಷ್ಟು; | ವಾರಾಹಿ ಎಡದಂಡೆ ನಾಲೆಯ ಜಾಲಗಳು ಹಾದು ಹೋಗುವ ಗ್ರಾಮಗಳ ವಿವರಗಳು ಕೆಳಗೆ ಕೋಷ್ಟಕ ರೂಪದಲ್ಲಿ ನೀಡಲಾಗಿದೆ. ಸದರಿ ನಾಲೆಯ ಯೋಜಿತ ಅಚ್ಚಕಟ್ಟು 10987ಹೆ ಗಳಾಗಿದ್ದು, ಈ ಪೈಕಿ ಆಗಸ್ಟ್ 2020ರ ಅಂತ್ಯದ ವರೆಗೆ ಸುಮಾರು 5810.00 ಹೆಕ್ಟೇರ್ ಅಚ್ಚುಕಟ್ಟು ಸಾಮರ್ಥ್ಯ ಸೃಜಿಸಲಾಗಿರುತ್ತದೆ ಹಾಗೂ 5345ಹೆ ಅಚ್ಚುಕಟ್ಟು ಸಾಮರ್ಥ್ಯ ಸೃಜಿಸಲು ಬಾಕಿ ಇರುತ್ತದೆ. |

| ಕಾಮಗಾರಿ | ಗ್ರಾಮಗಳ ಹೆಸರು |
|---|---|
| ವಾರಾಹಿ ಎಡದಂಡೆ ಕಾಲುವೆ | ಕುಳ್ಳಂಜೆ, ಹಾಲಾಡಿ-76, ಕಕ್ಕುಂಜೆ, ಬಿಲ್ಲಾಡಿ, ಹಾಲಾಡಿ-28, ಹಾರ್ದಳ್ಳಿ-ಮಂಡಳ್ಳಿ, ಯಡ್ಯಾಡಿ-ಮತ್ಯಾಡಿ, ಹಳ್ನಾಡಿ-ಹರ್ಕಾಡಿ, ವಂಡಾರು, ಶಿರಿಯಾರ, ಮೊಳಹಳ್ಳಿ, ಹೊಂಬಾಡಿ-ಮಂಡಾಡಿ, ಹೆಸ್ಕತ್ತೂರು, ಕೊರ್ಗಿ, ಕೆದೂರು, ಬೇಳೂರು, ಜಪ್ತಿ, ಕಾಳಾವರ, ಆಸೋಡು, ಕಂದಾವರ, ವಕ್ವಾಡಿ, ತೆಕ್ಕಟ್ಟೆ, ಉಳ್ಳೂರು, ಉಳ್ತೂರು. |

| ಕ್ರ. ಸಂ. | ಪ್ರಶ್ನೆಗಳು | ಉತ್ತರ |
|---|---|---|
| ಇ) | ಈ ಯೋಜನೆಗೆ ಭೂಸ್ವಾಧೀನ ಪಡಿಸಿಕೊಂಡ ಮತ್ತು ಭೂಸ್ವಾಧೀನ ಪ್ರಕ್ರಿಯೆಗೆ ಬಾಕಿಯಿರುವ ಭೂಮಿ ಎಷ್ಟು; ವಾರಾಹಿ ಎಡದಂಡೆ ಕಾಲುವೆಯ ಕಾಮಗಾರಿಯನ್ನು ಪೂರ್ಣಗೊಳಿಸಲು ಇಲಾಖೆಯಿಂದ ಯೋಜಿಸಲಾದ ಕಾಲಮಿತಿ ಯಾವುವು: | ವಾರಾಹಿ ಎಡದಂಡೆ ಕಾಲುವೆಯ ಜಾಲಗಳ ನಿರ್ಮಾಣಕ್ಕೆ ಒಟ್ಟು 509.00ಹೆ ಭೂಸ್ವಾಧೀನ ಪಡಿಸಿಕೊಳ್ಳುವ ಅವಶ್ಯಕತೆ ಇದ್ದು ಈ ಪೈಕಿ 326.00ಹೆ ವಿಸ್ತೀರ್ಣದ ಭೂ ಪ್ರದೇಶವನ್ನು ಇಲಾಖೆಗೆ ಸ್ವಾಧೀನ ಪಡಿಸಿಕೊಳ್ಳಲಾಗಿದೆ, ಬಾಕಿ 183.00ಹೆ ವಿಸ್ತೀರ್ಣದ ಭೂ ಪ್ರದೇಶವನ್ನು ಸ್ವಾಧೀನ ಪಡಿಸಿಕೊಳ್ಳುವ ಅವಶ್ಯಕತೆ ಇರುತ್ತದೆ. ವಾರಾಹಿ ಎಡದಂಡೆ ಕಾಲುವೆ ಕಾಮಗಾರಿಗಳನ್ನು 2020-2021 ರೊಳಗಾಗಿ ಪೂರ್ಣಗೊಳಿಸಲು ಅಗತ್ಯ ಕ್ರಮ ಕೈಗೊಳ್ಳಲಾಗುತ್ತಿದೆ. |

| | | |
|---|---|---|
| ಈ) | ಏತ ನೀರಾವರಿ ಯೋಜನೆಗೆ ತಗಲುವ ಯೋಜಿತ ಅಂದಾಜು ಮೊತ್ತವೆಷ್ಟು; ಈವರೆಗೂ ಬಿಡುಗಡೆಯಾದ ಅನುದಾನವೆಷ್ಟು; ವೆಚ್ಚ ಮಾಡಲಾದ ಮೊತ್ತವೆಷ್ಟು; ಬಿಡುಗಡೆಗೆ ಬಾಕಿಯಿರುವ ಅನುದಾನವೆಷ್ಟು; ಈ ಯೋಜನೆಯು ಹಾದುಹೋಗುವ ಗ್ರಾಮಗಳು ಯಾವುವು; | ವಾರಾಹಿ ಏತ ನೀರಾವರಿ ಕಾಲುವೆಯ ಜಾಲದ ನಿರ್ಮಾಣ ಕಾಮಗಾರಿಗಳಿಗೆ, ಭೂ-ಸ್ವಾಧೀನ ಹಾಗೂ ಇತರೆ ಕಾಮಗಾರಿಗಳಿಗೆ ರೂ.350.00 ಕೋಟಿಗಳೆಂದು ಅಂದಾಜಿಸಲಾಗಿರುತ್ತದೆ. ಸದರಿ ನಾಲೆಯ ಜಾಲಗಳನ್ನು ಕೈಗೊಳ್ಳಲು ಆಗಸ್ಟ್ 2020ರ ವರೆಗೆ ಬಿಡುಗಡೆಯಾದ ಅನುದಾನ/ ವೆಚ್ಚ ಮಾಡಲಾದ ಮೊತ್ತವು ರೂ. 87.28 ಕೋಟಿಗಳಾಗಿರುತ್ತದೆ ಹಾಗೂ ಇನ್ನುಳಿದ ಕಾಮಗಾರಿಗಳಿಗೆ ರೂ. 262.72 ಕೋಟಿ ಮೊತ್ತದ ಅವಶ್ಯಕತೆ ಇರುತ್ತದೆ. ಈ ಯೋಜನೆಯು ಹಾದುಹೋಗುವ ಗ್ರಾಮಗಳು ವಿವರಗಳನ್ನು ಪ್ರಶ್ನೆ ಸಂಖ್ಯೆ: 'ಆ' ರಲ್ಲಿನ ಕೋಷ್ಟಕದಲ್ಲಿ ನೀಡಲಾಗಿದೆ. |
| ಉ) | ಈ ಯೋಜನೆಯು ಹೊಂದಿರುವ ಅಚ್ಚುಕಟ್ಟು ಪ್ರದೇಶದ ವಿಸ್ತೀರ್ಣವೆಷ್ಟು; ಪೂರ್ಣಗೊಂಡ ಅಚ್ಚುಕಟ್ಟು ಪ್ರದೇಶದ ವಿಸ್ತೀರ್ಣವೆಷ್ಟು; ಬಾಕಿಯಿರುವ ಅಚ್ಚುಕಟ್ಟು ಪ್ರದೇಶದ ವಿಸ್ತೀರ್ಣವೆಷ್ಟು; | ವಾರಾಹಿ ಏತ ನೀರಾವರಿ ಕಾಲುವೆಯ 2723ಹೆ ಯೋಜಿತ ಅಚ್ಚಕಟ್ಟು ಪ್ರದೇಶ ಹೊಂದಿರುತ್ತದೆ .ಸದರಿ ಯೋಜಿತ ಅಚ್ಚುಕಟ್ಟು ಸೃಜಿಸುವ ಕಾಮಗಾರಿಗಳು ವಿವಿಧ ಹಂತದಲ್ಲಿ ಪ್ರಗತಿಯಲ್ಲಿರುತ್ತವೆ ಹಾಗೂ ಸದರಿ ನಾಲೆಯಡಿ 2723ಹೆ ಅಚ್ಚುಕಟ್ಟು ಸಾಮರ್ಥ್ಯ ಸೃಜಿಸಲು ಬಾಕಿ ಇರುತ್ತದೆ. |
| ಊ) | ಯೋಜನೆಗೆ ಭೂಸ್ವಾಧೀನ ಪಡಿಸಿಕೊಂಡ ಮತ್ತು ಭೂಸ್ವಾಧೀನ ಪ್ರಕ್ರಿಯೆಗೆ ಬಾಕಿಯಿರುವ ಭೂಮಿ ಎಷ್ಟು; | ವಾರಾಹಿ ಏತ ನೀರಾವರಿ ಕಾಲುವೆಯ ಜಾಲಗಳ ನಿರ್ಮಾಣಕ್ಕೆ ಒಟ್ಟು78.00ಹೆ ಭೂಸ್ವಾಧೀನ ಪಡಿಸಿಕೊಳ್ಳುವ ಅವಶ್ಯಕತೆ ಇದ್ದು, ಇದ್ದಕ್ಕಾಗಿ ಭೂ ಸ್ವಾಧೀನ ಪ್ರಕ್ರಿಯೆ ಜಾರಿಯಲ್ಲಿರುತ್ತದೆ. |
| ಋ) | ವಾರಾಹಿ ಏತ ನೀರಾವರಿ ಕಾಮಗಾರಿಯನ್ನು ಪೂರ್ಣಗೊಳಿಸಲು ಇಲಾಖೆಯಿಂದ ಯೋಜಿಸಲಾದ ಕಾಲಮಿತಿ ಯಾವುದು? | ವಾರಾಹಿ ಏತ ನೀರಾವರಿ ಕಾಲುವೆ ಕಾಮಗಾರಿಗಳನ್ನು ಗುತ್ತಿಗೆ ಕರಾರಿನನ್ವಯ ಡಿಸೆಂಬರ್-2020ಕ್ಕೆ ಪೂರ್ಣಗೊಳಿಸಲು ಯೋಜಿಸಲಾಗಿರುತ್ತದೆ. ಕೋವಿಡ್ ಸಂಕ್ರಾಮಿಕ ರೋಗ ಹಾಗೂ ಅರಣ್ಯ ಮತ್ತು ಇತರೆ ಭೂಮಿಗಳು ಇಲಾಖೆಗೆ ಹಸ್ತಾಂತರವಾಗ ಬೇಕಿರುವುದರಿಂದ ಮೇ-2021ರೊಳಗಾಗಿ ಪೂರ್ಣಗೊಳಿಸಲು, ಅಗತ್ಯ ಕ್ರಮ ಕೈಗೊಳ್ಳಲಾಗುತ್ತಿದೆ. |

ಸಂಖ್ಯೆ:ಜಸಂಇ 119 ಎಂಎಲ್‌ಎ 2020

(ರಮೇಶ್ ಲ. ಜಾರಕಿಹೊಳಿ)
ಜಲಸಂಪನ್ಮೂಲ ಸಚಿವರು